FEBRUARY 2012

# ಕಾನನ

ನಿಸರ್ಗದೆಡೆಗೆ ಪಯಣ

## ಲೇಖನಗಳು






ಅನಿಸಿಕೆ


E-mail: kaanana.mag@gmail.com


ಮುಖಪುಟ: ಕಾವೇರಿ ವನ್ಯಧಾಮ



# ಸಂಪಾದಕೀಯ

ಬೇಸಿಗೆ ಬಂದಿತೆಂದರೆ ಕಾಡೆಲ್ಲ ಒಣಗಿ ಬೋಳಗುತ್ತದೆ. ಕಾಡಿನಲ್ಲಿ ಒಣ ಹುಲ್ಲು, ತರಗೆಲೆ, ಕಡ್ಡಿಗಳು ಇರುವುದರಿಂದ ಬೆಂಕಿ ಬೀಳುವ ಸಾಧ್ಯತೆಗಳು ಬಹಳ ಹೆಚ್ಚು. ಯಾವುದೋ ಕಾರಣಗಳಿಂದ ಅರಣ್ಯ ಅಧಿಕಾರಿಗಳ ಮೇಲಿರುವ ಕೋಪಕ್ಕೆ ಹಾಗೂ ಉದ್ದೇಶ ಪೂರಕವಾಗಿ ಕಾಡುಗಳಿಗೆ ಬೆಂಕಿ ಇಡುವುದು, ಕಾಡಿನ ಮಧ್ಯೆ ರಸ್ತೆಗಳಲ್ಲಿ ಹಾದು ಹೋಗುವಾಗ ಬೀಡಿ, ಸಿಗರೇಟು ಹಚ್ಚುವುದು, ಕಟ್ಟಿಗೆಗಾಗಿ ಹಾಗೂ ದನಗಳ ಮೇವಿಗಾಗಿ ಕಾಡಿಗೆ ಬೆಂಕಿಹಾಕುವುದರಿಂದ ಮನುಷ್ಯನ ಉಳಿವಿಗೆ ಬೇಕಾಗುವ ಅಮೂಲ್ಯವಾದ ಕಾಡುಗಳು ನಾಶವಾಗಿ, ವನ್ಯ ಪ್ರಾಣಿ-ಪಕ್ಷಿಗಳು ಮತ್ತು ಕೀಟ-ಸರಿಸೃಪಗಳು ಉಳಿವಿಗೆ ಸಂಚಕಾರವಾಗುತ್ತದೆ. ಅರಣ್ಯಗಳು ನಮ್ಮೆಲ್ಲರ ಬದುಕಿಗೆ ಬೇಕಾದ ಬಹುಮುಖ್ಯ ಆಸ್ತಿ ಅದನ್ನು ಉಳಿಸುವುದು ಬೆಳೆಸುವುದು ನಮ್ಮೆಲ್ಲರ ಕರ್ತವ್ಯ. ಅರಣ್ಯಗಳಲ್ಲಿ ಬೆಂಕಿ ಕಂಡುಬಂದಲ್ಲಿ ಹತ್ತಿರದ ಅರಣ್ಯ ಇಲಾಖೆಗೆ ತಿಳಿಸಿ. ಇದು ಕಾಡಿಗೆ ಬೆಂಕಿ ಬೀಳುವ ಬೇಸಿಗೆಯ ಸಮಯ....!

'ಕಪ್ಪೆಯ ಮಾಯಲೋಕ' ದಲ್ಲಿ ಕಪ್ಪೆಗಳ ಜೀವನ ಶೈಲಿಯನ್ನು ಹಾಗೂ ಅವು ವಿಕಾಸವಾದ ರೀತಿಯನ್ನು ಕುರಿತು ಕೆ.ಪಿ.ಶಂಕರಪ್ಪ ಸುಂದರವಾಗಿ ಬರೆದಿದ್ದರೆ. ಯಾವೂದೋ ಗಿಡವೊಂದು *ಬ್ಲ್ಯಾಕ್ ಹೆಡೆಡ್ ಕುಕ್ಕೂ ಶ್ರೈಕ್* (ಕರಿತಲೆ ಹಕ್ಕಿ) ಯಂತಹ ದೊಡ್ಡ ಹಕ್ಕಿಯನ್ನು ಹಿಡಿದುಕೊಂಡು ಆಶ್ಚರ್ಯ ಮೂಡಿಸಿ, ಕೀಟಹಾರಿ ಸಸ್ಯದ ಹುಡುಕಾಟ ಹಕ್ಕಿಲೋಕದಲ್ಲಿ ನೆಡೆದಿದೆ.

ವಿ.ವಿ ಅಂಕಣದಲ್ಲಿ ಮುರಳಿಯವರು ಭೂಮಿಯ ಮೇಲೆ ಜೀವಿಗಳ ಉಗಮದ ಬಗ್ಗೆ ವಿಜ್ಞಾನಿಗಳ ಸಂಶೋದನೆಗಳ ಕುರಿತು ಬರೆದ "ಜೀವ ಸೃಷ್ಟಿಯ ಬುಗ್ಗೆ" ಮತ್ತು ದಕ್ಷಿಣ ಅಮೇರಿಕದ ಅಮೇಜಾನ್ ಕಾಡಿನ ನದಿಗಳಲ್ಲಿ ಕಂಡು ಬರುವ "ಅರಪೈಮಾ" ಎಂಬ ಮೀನಿನ ಬಗ್ಗೆ ಚಿತ್ರಿಸಿದರೆ.

ಫೆಬ್ರುವರಿ, ಶಿವರಾತ್ರಿಯ ಸಮಯಕ್ಕೆ ಕಾಡೆಲ್ಲ ಗಮ್ಮೆನುವಂತೆ ಸುವಾಸನೆಯನ್ನು ಚೆಲ್ಲುವ "ಜಾಲಾರಿಯ ಹೂ" ನ್ನು ಕುರಿತು ಮಮತರವರು ಚಿತ್ರಿಸಿದರೆ.

ಕಾಡು ಸುತ್ತುವ ಯುವ ಪೀಳಿಗೆಯನ್ನು ಕುರಿತು, ಕಾಡನ್ನು ಕುರಿತು " ಕಾಡಿನ ಕುವರರು" ಎಂಬ ಕವನದಲ್ಲಿ ನಾಗರಾಜ್ ಆರ್ ಅಂಬಿಗರವರು *'ಕಾಡಿಗೆ ಕಾವಲು ನಾವೆಲ್ಲಾ'* ಎಂದು ಹೇಳಿಕೊಂಡಿದ್ದಾರೆ.

ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು ಹಾಗೂ ಲೇಖನಗಳನ್ನು ತಾವೂ ಕಾನನಕ್ಕೆ ಬರೆಯಬಹುದು.



**ಇ–ಮೇಲ್ ವಿಳಾಸ:** kaanana.mag@gmail.com

**Wildlife Conservation Group**

# ಕಪ್ಪೆಯ ಮಾಯಾಲೋಕ

ಕಲ್ಲು ಗುಡ್ಡದ ಮೇಲೊಂದು ನೀರಿನ ಹೊಂಡವಿದೆ. ಹೊಂಡವೆಂದರೆ ಅಷ್ಟೇನೂ ದೊಡ್ಡದಲ್ಲಾ ಬಹಳ ಚಿಕ್ಕದು. ಆ ಹೊಂಡದ ಮೊಣಕಾಲುದ್ದದ ನೀರಲ್ಲಿ ಆಟವಾಡುತ್ತಿದ್ದ ನೀಲಿ ಚಡ್ಡಿದಾರಿಗಳಾದ ಮೂರ್ನಾಲ್ಕು ಇಸ್ಕೂಲು ಹುಡುಗರು ಮೀನು ಹಿಡಿಯುತ್ತಿದ್ದರು. ಹಿಡಿದ ಮೀನನ್ನು ಮನೆಗೆ ಒಯ್ದು ಅಮ್ಮನಿಗೆ ತೋರಿಸಿದಾಗಲೇ ಅವರಿಗೆ ತಿಳಿದಿದ್ದು ಅವು ಮೀನಲ್ಲಾ ಗೊದಮಟ್ಟೆ ಕಪ್ಪೆಮರಿಗಳೆಂದು. ಮುನ್ನೂರು ಮಿಲಿಯನ್ ವರ್ಷಗಳ ಹಿಂದೆ ಸಮುದ್ರವನ್ನು ಬಿಟ್ಟು ಆಹಾರವನ್ನು ಹುಡುಕಿಕೊಂಡು ಭೂಮಿಯ ಮೇಲೆ ಬಂದ ಮಡ್ ಸ್ಕಿಪ್ಪರ್ ನಂತಹ ಜೀವೀಯೇ ಸಕಲ ಸ್ತನಿ, ಪಕ್ಷಿ, ಉರುಗ ವಾನರ, ಕಪ್ಪೆಗಳ ಪೂರ್ವಜ ಎಂದು ಈ ಮಕ್ಕಳಿಗೆ ಗೊತ್ತಾಗಿದ್ದರೆ ಚನ್ನಾಗಿರುತ್ತಿತ್ತು!

ಮುನ್ನೂರು ಮಿಲಿಯನ್ ವರ್ಷಗಳ ಹಿಂದೆ ನೀರನ್ನು ತ್ಯಜಿಸಿ ಭೂವಾಸಿಯಾಗಲು ಪ್ರಯತ್ನಿಸಿದ ಮೊದಲು ಮೀನಿಗೆ ಎದುರಾದ ಮೊದಲನೇ ಸಂಕಟ ಉಸಿರಾಟ ತೊಂದರೆ. ನೀರಿನಲ್ಲಿ ಕರಗಿದ್ದ ಆಮ್ಲಜನಕವನ್ನು ಹಾಯಾಗಿ ಕಿವಿರುಗಳ ಮೂಲಕ ಹೀರಿಕೊಂಡು ಬದುಕಿದ್ದ ಮೀನನ್ನು ಹೋಲುವ ನಮ್ಮೆಲ್ಲರ ಪೂರ್ವಜ, ಆಹಾರದ ಆಸೆಗೆ ಭೂಮಿಯ ಮೇಲೆ ಬಂದಾಗ ಶ್ವಾಸಕೋಶವನ್ನು ಅಭಿವೃದ್ಧಿ ಪಡಿಸಿಕೊಂಡು ಉಸಿರಾಟ ತೊಂದರೆಯನ್ನು ನಿವಾರಿಸಿಕೊಂಡವು. ಇದೇ ವಂಶದ ಒಂದು ಸಾಲು ಮುಂದೆ ಎದುರಾದ ಹಲವು ಜೀವನ ಸವಾಲುಗಳನ್ನು ಯಶಸ್ವಿಯಾಗಿ ಎದುರಿಸಿ, ಪರಿಸರಕ್ಕೆ ಹಾಗು ಎದುರಾದ ಸಮಸ್ಯೆಗಳಿಗೆ ತಕ್ಕಂತೆ ತಮ್ಮ ದೇಹಗಳನ್ನು ಬದಲಿಸಿಕೊಂಡು ಕಪ್ಪೆಗಳಾದವು. ಬಿಸಿಲಿನ ಬೇಗೆಗೆ ಅವುಗಳ ಚರ್ಮ ಒಣಗಿ ಉಸಿರಾಟಕ್ಕೆ ತೊಂದರೆಯಾದಗ ಹಾಗೆ ಚರ್ಮವನ್ನು ಸದಾ ತೇವಯುಕ್ತವಾಗಿ ಇಟ್ಟುಕೊಳ್ಳಲು ಚರ್ಮದ ಮೇಲೆ ವ್ಯಾಕ್ಸ್ ಗ್ಲಾಂಡ್ ಗಳನ್ನು ಮಾಡಿಕೊಂಡವು. ಅದು ಸ್ರವಿಸುವ ಜಿಡ್ಡನ್ನು. ಮೈಯಿ ಕೈಯಿಗೆಲ್ಲಾ ಮಸಾಜ್ ಮಾಡಿಕೊಂಡು ಬದುಕುವ ಕಪ್ಪೆಯನ್ನು ಈಗಲೂ ಕಾಣಬಹುದು.



ತ್ವಚೆ ತೇವವಿದ್ದರೆ ಸೂರ್ಯನ ತಾಪದಿಂದ ತಪ್ಪಿಸಿಕೊಳ್ಳಲು ಹಾಗು ಚರ್ಮದ ಮೂಲಕ ಉಸಿರಾಡಲು ಸುಲಭ. ಆದರೆ ರುಚಿಯಾದ ಮಾಂಸದ ಉಂಡೆಯಂತಿರುವ ಕಪ್ಪೆಯು ಹಾವುಗಳಂತ ಮಾಂಸಹಾರಿ ಪ್ರಾಣಿಗಳಿಗೆ ಪ್ರಿಯವಾದ ಆಹಾರ. ಅದಕ್ಕೆ ಕೆಲವು ಕಪ್ಪೆಗಳು ಚರ್ಮದ ಮೇಲಿರುವ ವಾಕ್ಸ್ ಗ್ಲಾಂಡ್ನಲ್ಲೇ ವಿಷ ಉತ್ಪಾಧಿಸಿ ತನ್ನನ್ನು ತಿಂದ ಪ್ರಾಣಿ ಸಾಯುವಂತೆ ಮಾಡುತ್ತವೆ. ಸುಮ್ಮನೆ ತಾನೂ ಸತ್ತು, ಅದನ್ನು ತಿಂದ ಮಾಂಸಹಾರಿಯೂ ಸತ್ತರೆ ವಿಷವಿದ್ದು ಏನು ಪ್ರಯೋಜನ ಅದಕ್ಕೆ ಹಲವು ಅತ್ಯಾಕರ್ಷಕ ಬಣ್ಣ ಬಣ್ಣಗಳ ಚರ್ಮಗಳನ್ನು ಈ ವಿಷಕಾರಿ ಕಪ್ಪೆಗಳು ತನ್ನ ಶತ್ರುಗಳಿಗೆ ಪ್ರದರ್ಶಿಸಿ "ನಾನು ವಿಷಕಣಪ್ಪ ನನ್ನ ತಂಟೆಗೆ ಬರಬೇಡ ಹುಷಾರ್!" ಎಂದು ಎಚ್ಚರಿಸುತ್ತವೆ. ಅವುಗಳ ಬಣ್ಣ ಬಣ್ಣದ ಚರ್ಮ ಶತ್ರುಗಳಿಗೆ ಕಾಣಬೇಕಲ್ಲವೆ? ಆದ್ದರಿಂದ ಈ ವಿಷಕಾರಿ ಕಪ್ಪೆಗಳು ಹಗಲಿನಲ್ಲಿ ಕ್ರಿಯಾಶೀಲವಾಗಿದ್ದು, ಬಣ್ಣವನ್ನು ಅಡ್ವರ್ಟೈಸ್ ಮಾಡಿ ತಮ್ಮನ್ನು ತಾವು ರಕ್ಷಿಸಿಕೊಳ್ಳುತ್ತವೆ. "*ಮೋಸ ಹೋಗುವವರು ಇರುವವರಿಗೂ ಮೋಸ ಮಾಡುವವರು ಇದ್ದೇ ಇರುತ್ತಾರೆ*". ಕಡುನೀಲಿ ಹಾಗು ಕಪ್ಪು ಬಣ್ಣದ ಚರ್ಮವನ್ನು ಹೊಂದಿರುವ ವಿಷವಿಲ್ಲದಿದ್ದರೂ ಚಿತ್ರದಲ್ಲಿ ಕಾಣುವ ಕಪ್ಪೆ ತನ್ನ ಗಿಲೀಟು ಬಣ್ಣವನ್ನು ಪ್ರದರ್ಶಿಸಿ ನಾನು ವಿಷಕಾರಿ ಕಪ್ಪೆ ಎಂದು ತನ್ನ ಶತ್ರುಗಳಿಂದ ತಪ್ಪಿಸಿಕೊಂಡು ನೆಮ್ಮದಿಯ ಬದುಕು ಸಾಗಿಸುತ್ತಿದೆ!. ಸಕಲ ಕಪ್ಪೆಗಳಿಗೂ ಹಲ್ಲಿಲ್ಲದದ್ದರೂ ಬಹು ಉಪಯೋಗಿ ಅಂಟು ಅಂಟಾಗಿರುವ ನಾಲಿಗೆ ಇದೆ.



"ಚಲಿಸುವ, ಅಲುಗಾಡುವ ಸಕಲ ಜೀವಸಂಕುಲವನ್ನು ಜಾತಿ ಬೇದ ಮಾಡದೆ ಕಪ್ಪೆಗಳು ಭಕ್ಷಿಸುತ್ತವೆ " ಕೆಲವೊಮ್ಮೆ ಸಣ್ಣ ಹಾವುಗಳನ್ನೂ ಸಹ ಒಮ್ಮೆಯೇ ನುಂಗಿ ನೀರು ಕುಡಿದಿರುವುದನ್ನು ಕೆಲವರು ಪ್ರತ್ಯಕ್ಷ ಕಂಡಿದ್ದಾರೆ. ಪ್ರತಿಬಾರಿ ನುಂಗುವಾಗಲು ಸಹ ಕಪ್ಪೆ ತನ್ನ ಕಣ್ಣುಗಳನ್ನು ಮುಚ್ಚುವುದು ವಿಶೇಷ. ಕಪ್ಪೆಯ ಎರಡು ಅತ್ಯಾಕರ್ಷಕ ಕಣ್ಣುಗಳು ನೀರಿನ ಒಳಗೂ ಹಾಗು ಭೂಮಿಯ ಮೇಲೂ ಬಹಳ ಚೆನ್ನಾಗಿ ಕಾರ್ಯನಿರ್ವಹಿಸಬಲ್ಲವು!.

ನಾವು ನೀರಿಗೆ ಡೈವ್ ಹೊಡೆದಷ್ಟು ಸುಲಭವಾಗಿ ಕಪ್ಪೆಗಳು ಮಣ್ಣಿಗೆ ಡೈವ್ ಹೊಡೆಯ ಬಲ್ಲವು. ಶತ್ರುಗಳಿಂದ ಮತ್ತು ಬಿಸಿಲಿನಿಂದ ತಪ್ಪಿಸಿಕೊಳ್ಳಲು ಒಂದು ಅಡಿ ಆಳದವರೆಗೂ ಮಣ್ಣಿನಲ್ಲಿ ಕಾಲು ಕೈ ಆಡಿಸಿ ಮಣ್ಣನ್ನು ಸರಿಸಿ ಒಂದು ಅಡಿ ಆಳದ ವರಿಗೂ ಮಣ್ಣಿನ ಒಳಕ್ಕೆ ಡೈವ್ ಹೊಡೆದು ಬಚ್ಚಿಟ್ಟುಕೊಳ್ಳುತ್ತವೆ. ಹೀಗೆ ಮಣ್ಣಿನಲ್ಲಿ, ಕಲ್ಲಿನ ಕೆಳಗೆ ಹುದುಗಿಕೊಂಡು ಮುಂದಿನ ಮಳೆಗಾಗಿ ಹತ್ತಾರು ತಿಂಗಳುಗಳ ಕಾಲ ಅರೆ ನಿದ್ರೆಯಲ್ಲಿ ಕಾಯುವ ತಾಕತ್ತನ್ನು ಕೆಲವು ನೆಲಕಪ್ಪೆಗಳು ಹೊಂದಿವೆ.

ಜೀವ ವಿಕಾಸದಲ್ಲಿ ಹಾವುಗಳು ಕಾಲು ಕಳೆದು ಕೊಂಡು ಒಂದು ಅಡ್ವಾಂಟೇಜ್ ಪಡೆದರೆ ಈ ಕಪ್ಪೆಗಳು ಕಾಲುಗಳನ್ನೇ ಅಭಿವೃದ್ಧಿಪಡಿಸಿಕೊಂಡು ಜಿಗಿಯಲು, ನೀರಿನಲ್ಲಿ ಈಜಲು, ಕೆಲವೊಮ್ಮೆ ಹತ್ತಾರು ಅಡಿ ಗ್ಲೈಡ್ ಮಾಡುವ ಸಾಮರ್ಥ್ಯವನ್ನು ಪಡೆದುಕೊಂಡಿವೆ.



ಗ್ಲೈಡಿಂಗ್ ಕಪ್ಪೆಯಂತು ತನ್ನ ನಾಲ್ಕು ಅತ್ಯಾಕರ್ಷಕ ಕಾಲುಗಳ ಜಾಲಪಾದಗಳನ್ನೇ ಪ್ಯಾರಾಚೂಟುಗಳಂತೆ ಬಳಸಿ ಇಪ್ಪತ್ತು ಅಡಿಗಳಷ್ಟು ದೂರ ಗ್ಲೈಡ್ ಮಾಡಬಲ್ಲದು, ಬೆರಳ ತುದಿಯಲ್ಲಿ ಇರುವ ಸೂಕ್ಷ್ಮ ಹೀರುಕೊಳವೆಗಳನ್ನು ಬಳಸಿ ನೈನ್ಟಿ ಡಿಗ್ರಿ ಇರುವ ನೈಸಾದ ಎಲೆಯ ಮೇಲೂ ಆರಾಮಾವಾಗಿ ನಡೆಯಬಲ್ಲದು. ಎಂದಾದರೂ ನಿಮಗೆ ಕಪ್ಪೆ ಸಿಕ್ಕರೆ ಅದು ವಿಷಕಾರಿ ಕಪ್ಪೆ ಅಲ್ಲದಿದ್ದರೆ ಅದನ್ನು ಒಂದು ಬಾರಿ ಕೈಯಿಂದ ಹಿಡಿಯಲು ಪ್ರಯತ್ನಿಸಬಹುದು. ಒಮ್ಮೆ ನಾನು ಪ್ರಯತ್ನಿಸಿ ಸುಸ್ತಾಗಿದ್ದೇನೆ. ಅವುಗಳ ನೆಗೆಯುವ ವೈಕರಿಯನ್ನು ಕಂಡು ಬೆರಗಾಗಿದ್ದೇನೆ. ತೇವವಿರುವ ಜಾಗದಲ್ಲಿ ವಾಸಿಸಲು ಇಷ್ಟ ಪಡುವ ಕಪ್ಪೆಗಳಿಗೆ ನಿಮ್ಮ ಬಾತ್ ರೂಮನ್ನು ಕಂಡರೆ ಪಂಚಪ್ರಾಣ. ಸುಮಾರು ಆರೇಳು ಜಾತಿಯ ಕಪ್ಪೆಗಳನ್ನ ನಮ್ಮ ಬಾತ್ ರೂಮಿನಲ್ಲೇ ಫೋಟೊ ತೆಗೆದಿದ್ದೇನೆ!

ವೀಕೆಂಡಿನ ಸುಖನಿದ್ರೆ ಮಾಡಲೆಂದೇ ನಗರದಿಂದ ನಮ್ಮ ರೂಮಿಗೆ ಬರುವ ಸಾಫ್ಟ್ ವೇರ್ ಗೆಳೆಯ ಒಮ್ಮೆ ಮಧ್ಯಾಹ್ನದವರೆಗೂ ಸುಖನಿದ್ದೆ ಗೈದು ಎದ್ದು ಬಾತುರೂಮು ಪ್ರವೇಶಿಸಿ ಬೋಲ್ಟ್ ಹಾಕಿಕೊಂಡ. ಇದ್ದಕ್ಕಿದ್ದಂತೆ ಬಾತ್ ರೂಮಿನಿಂದಲೇ ಕಿಟಾರನೆ ಚೀರಿ "ಅಯ್ಯಯ್ಯೋ ಹಾವು!" ಎಂದು ಜೋರಾಗಿ ಕಿರುಚಲಾರಂಬಿಸಿದ!.

ನಿದ್ದೆಯ ಮಂಪರಿನಲ್ಲೇ ಬಾತ್ ರೂಮು ಪ್ರವೇಶಿಸಿದ್ದ ಗೆಳೆಯ ಹೇಗೋ ಬೋಲ್ಟ್ ಹಾಕಿಕೊಂಡಾದಮೇಲೆ, ಕಪ್ಪೆ ಹಿಡಿಯಲೆಂದು ಬಂದಿದ್ದ ಮೊಳ ಉದ್ದದ *ಗ್ರೀನ್ ಕೀಲ್ ಬ್ಯಾಕ್* ಹಾವು ಬಾಗಿಲ ಚಿಲಕದಲ್ಲೇ ಸುತ್ತಿಕೊಂಡಿದ್ದನ್ನು ಕಂಡು ಕಿರುಚುತ್ತಿದ್ದಾನೆ!!. ಈಗ ಬಾಗಿಲಿನ ಚಿಲಕವನ್ನು ತಗೆಯಲು ಅವನಿಗೆ ಭಯ, ನಾನು ಹೊರಗಿಂದ ತೆಗೆಯುವ ಹಾಗೇ ಇಲ್ಲ! ಸುಮ್ಮನೆ ಸುಖವಾಗಿ ಇರುವ ಹಾಗೂ ಇಲ್ಲ. ಅವರ ಕುಟುಂಬಕ್ಕೆಲ್ಲಾ ಇವನೇ ಏಕಮಾತ್ರ ಪ್ರೀತಿಯ ಪುತ್ರ ಬೇರೆ!. ಗ್ರೀನ್ ಕೀಲ್ ಬ್ಯಾಕ್ ಹಾವು ವಿಷವಿಲ್ಲ ಎಂದು ನನಗೆ ಗೊತ್ತಿದ್ದರೂ.ಅವನ ಕಿರುಚಾಟವನ್ನು ಕೇಳಿ, ಬೇಡ ನಮ್ಮ ಪಜೀತಿ! ಕೊನೆಗೆ ನಾನು ಬಾತ್ ರೂಮಿನ ಕಿಟಕಿಗೆ ಶಾಶ್ವತವಾಗಿ ಫಿಕ್ಸ್ ಆಗಿದ್ದ ಗಾಜನ್ನು ಒಡೆದಾಕಿ, ಕಿಟಕಿಯಿಂದ ಕೋಲಾಕಿ ಹಾವನ್ನು ಚಿಲಕದಿಂದ ಸರಿಸಿ ಬಾಗಿಲು ತೆಗೆಯುವ ವರಿಗೂ ಬಕ್ಕೆಟ್ಟನ್ನು ದಬ್ಬಾಕಿ ಅದರ ಮೇಲೆ ನಿಂತಿದ್ದ ಗೆಳೆಯ, ತಣ್ಣನೆಯ ಬಾತ್ ರೂಮಿನಲ್ಲೇ ಬೆವರಿದ್ದ! ಈ ಯಕಶ್ಚಿತ್ ಕಪ್ಪೆಯ ದೆಸೆಯಿಂದ ಹಾವು ಬಂದು, ನನ್ನ ಒಬ್ಬ ಗೆಳೆಯ ಮತ್ತೆ ಎಂದೂ ನಮ್ಮ ರೂಮಿನ ಕಡೆ ಕೂಡ ತಲೆಹಾಕಿ ಮಲಗದ ಹಾಗೆ ಮಾಡಿದೆ.!








# ಹಕ್ಕಿ ಲೋಕ

*** ಉಗುರು ಬೂತಾಳಿ ಮತ್ತು ಕರಿತಲೆ ಹಕ್ಕಿ**

ವೈಜ್ಞಾನಿಕ ಹೆಸರು : ***Caracina melanoptrera***

ಇಂಗ್ಲೀಷ್ ಹೆಸರು : **Black-headed Cuckoo shrike**



ಮನುಷ್ಯರು  ಮೊಲ, ಕಾಡುಕೋಳಿ, ಗೌಜುಗ ಇವೇ ಮೊದಲಾದ ಪ್ರಾಣಿ ಪಕ್ಷಿಗಳಿಗೆ ಬಲೆಯೊಡ್ಡಿ ಹಿಡಿದು ತಿಂದಿರುವುದನ್ನು ಕೇಳಿದ್ದೇನೆ ಕಂಡಿದ್ದೇನೆ .

ಅಂದು ಸಸ್ಯಶಾಸ್ತ್ರಜ್ಞನಾದ ಗೆಳೆಯ ಶಿಂಡೆ ನಮ್ಮೂರಿನ ಕಾಡಿನಲ್ಲಿ ಇರುವ ಕೆಲ ಸಸ್ಯಗಳ ಅಧ್ಯಯನಕ್ಕೆ ಕೆಲವು ಔಷಧೀಯ ಸಸ್ಯಗಳ ಸ್ಯಾಂಪಲ್ ಸಂಗ್ರಹಿಸಲು ಬಂದಿದ್ದ. ಬುಗರಿಕಲ್ಲು ಕಾಡನ್ನೆಲ್ಲಾ ಸುತ್ತಿದ ಮೇಲೆ ಜೇಡೀ ಗುಡ್ಡದ ಮೇಲೆ ಕಾಣುವ ಸೂರ್ಯಾಸ್ತದ ವಿಹಂಗಮ ನೋಟವನ್ನು ಸವಿಯಲು ಗುಡ್ಡವೇರಿ ಕುಳಿತೆವು. ಕ್ಷಣ ಕ್ಷಣಕ್ಕೂ ಬದಲಾಗುವ ಆಕಾಶವನ್ನು, ಮೋಡದ ಹಿಂದೆ ಮರೆಯಾಗುತ್ತಿದ್ದ ಸೂರ್ಯನನ್ನು ನೋಡುತ್ತಾ ಕುಳಿತಿದ್ದೆವು .  ಶಿಂಡೆಯು ಅಲ್ಲೇ ಮಾರು ದೂರದಲ್ಲಿ ಬಂಡೆಯ ಮೇಲೆ ಇದ್ದ ನೀರಿನ ಹೊಂಡದ ಪಕ್ಕದ ಜವುಗು ಜವುಗಾಗಿರುವ ಬಳಿ ಕುಳಿತು ಏನನ್ನೋ ನೋಡುತ್ತಿದ್ದ. ಅಲ್ಲಿಂದಲೇ ನನ್ನನ್ನು ಕೈ ಬೀಸಿ ಕರೆದು ಎರಡು ಅಂಗುಲದ ತಿಳಿರಕ್ತ  ವರ್ಣದ ಒಂದು ಗಿಡವನ್ನು ತೋರಿಸಿದ.



“ನೋಡು ಇದು ***ಡ್ರಾಸೆರಾ*** ಎಂಬ ಕೀಟಾಹಾರಿ ಸಸ್ಯ! ಅಮೇಜಾನ್ ಕಾಡಿನಲ್ಲಿ ಕಂಡು ಬರುವ ***ಹೂಜಿಗಿಡ*** ಹಾಗೂ ***ವೀನಸ್ ಫ್ಲೈ ಟ್ರಾಪ್*** ತರಹದ ಕೀಟಾಹಾರಿ ಸಸ್ಯಗಳು ಇವೆಯಲ್ಲಾ, ಅದೇ ರೀತಿ ಈ ಗಿಡವೂ ಕೂಡ ಸಣ್ಣ ಸಣ್ಣ ಕೀಟಗಳನ್ನು ಹಿಡಿದು ತಿನ್ನುತ್ತದೆ” ಎಂದು, ಅದು ಹಿಡಿದು ಕೊಂಡಿದ್ದ ಒಂದು ಇರುವೆಯನ್ನು ತೋರಿಸಿದ. ಸೂಕ್ಷ್ಮ ವಾಗಿ ಗಮನಿಸಿದರೆ ಸೂಜಿಯ ಮೊನೆಯಂತಾ ಕೆಲವು ಕೆಂಪು ಕುಡಿಗಳಲ್ಲಿ ಅಂಟು ಅಂಟಾಗಿದ್ದ ಗೋಂದಿಗೆ ಕೆಲವು ಸಣ್ಣ ಸಣ್ಣ ನೊಣ, ಇರುವೆಗಳು ಸಿಕ್ಕಿ ಹಾಕಿಕೊಂಡಿದ್ದವು !

ಮಾರನೇ ದಿನ ಸಿಕ್ಕ ನಮ್ಮ ಕಾಡು ಸಿದ್ದನನ್ನು “ ಏನೋ ಸಿದ್ದ , ಪ್ರಾಣಿಗಳನ್ನ ಹಿಡಿದು ತಿನ್ನೋ ಗಿಡ ಈ ಕಾಡಾಗ ಯಾವುದಾನ ಇದ್ಯಾ? ಎಂದು ವಿಚಾರಿಸಿದೆ.

“ ನಮ್ಮ ಕಾಡಾಗ ಅಂತದ್ಯಾವುದು ಇಲ್ಲ ಸ್ವಾಮಿ, ಈ ಇಡೀ ಕಾಡಿನ ಮೂಲೆ-ಮೂಲೇನೂ ಸೋಸಿಬಿಟ್ಟಿದ್ದೀನಿ ನಾನು. ಆದರೆ ಮಲೆ- ಮಾದೇಶ್ವರನ್ ಬೆಟ್ಟದ ಹತ್ರ *ಪನ್ನಾಚಿ ಕಾಡು* ಅಂತ ಅದೇ. ಆ ಕಾಡಲ್ಲಿ ಉಗುರು ಭೂತಾಳಿ ಮರ ಇದೆಯಂತೆ, ಅದಕ್ಕೆ ಸುಮ್ನೆ ಉಗುರು ಸೋಕಿಸಿ ಬಿಟ್ಟರೆ ಸಾಕಂತೆ, ಅದರ ಬೇರುಗಳು ಬಂದು ನರ ಮನುಷ್ಯರನ್ನೇ ಹಿಡಕೋ ಬುಡತಾದಂತೆ! ಯಾವುದೇ ಪ್ರಾಣಿನೇ ಆಗಲಿ ಆ ಮರ ಇರೋ ಕಾಡಿಗೆ ಹೋಗಲ್ಲಾ ಅಂತ ನಮ್ಮ ತಾತಾ



ಹೇಳ್ತಾ ಇದ್ದ ಸ್ವಾಮಿ. ಸತ್ಯ ಹೇಳಬೇಕು ಸ್ವಾಮಿ. ನಾನಂತೂ ಅದನ್ನ ನೋಡಿಲ್ಲಾ . "***ಆ ಏಳ್ಮಲೆ ಎಪ್ಪತ್ತೇಳು ಮಲೆ ಅಪ್ಪಾ ಮಾದಪ್ಪನ ಪಾದಕ್ಕೆ ಒಂದ್ ಸಾರಿ ಉಗೇ ಎನ್ನಪ್ಪೋ ಉಗೇ....!***' ಎಂದು ಆಕಾಶಕ್ಕೆ ಕೈ ಮುಗಿದು, ಆ ಪರಮಾತ್ಮ ಏನೇನು ಮಡಗವನೋ ಈ ಲೋಕದಾಗ ಬಲ್ಲೋರು ಯ್ಯಾರು? ನೀವೇ ಹೇಳಿ ಎಂದ.

ಅಂದು ಸಂಜೆ ನಮ್ಮ ತೋಟದ ಕೆರೆಯ ಬಳಿ ಯಾವುದೋ ಹೊಸ ಹಕ್ಕಿಯೊಂದು ಒಂದೇ ಸಮನೆ ಕೂಗಿಕೊಳ್ಳುತ್ತಿತ್ತು. ಕ್ಯಾಮರಾ ಹಿಡಿದು ನನ್ನ ರೂಮಿನಲ್ಲಿರುವ ಪಿಳ್ಳೆ ಯನ್ನು ಜೊತೆಗೆ ಕರೆದು ಕೊಂಡು ಕೆರೆಯ ಬಳಿ ಹೊರಟೆ. ಒಂದೇ ಸಮನೆ ಕೂಗುತ್ತಿದ್ದ ಆ ಸಿಮೆಂಟ್ ಬಣ್ಣದ ಕಪ್ಪು ತಲೆಯ ಹಕ್ಕಿ ದೂರದಿಂದಲೇ ನಮಗೆ ಕಂಡಿತು. ನಮ್ಮನ್ನು ಕಂಡಿದ್ದೇ ತಡ ಕೂಗುವುದನ್ನು ನಿಲ್ಲಿಸಿ ರಪರಪ ರೆಕ್ಕೆ ಹೊಡೆದುಕೊಂಡು ಹಾರಲು ಪ್ರಯತ್ನಿಸಿ ವದ್ದಾಡುತ್ತಿದೆ. ಆದರೆ ಹಾರಲು ಆಗುತ್ತಿಲ್ಲ. ಯಾವುದೋ ಗಾಳಿಪಟದ ದಾರಕ್ಕೋ ಏನೋ ಅದರ ರೆಕ್ಕೆ ಸಿಕ್ಕಿಹಾಕಿ ಕೊಂಡು ಗಿಡದಿಂದ ಬಿಡಿಸಿಕೊಳ್ಳಲು ಪಾಡು ಪಡುತ್ತಿದೆ ಪಾಪ ಈ ಹಕ್ಕಿ.

ನಮಗೋ ಒಂದು ಹಕ್ಕಿಯನ್ನು ರೆಸ್ಕ್ಯೂ ಮಾಡುವ ಅವಕಾಶ ದಕ್ಕಿತಲ್ಲಾ ಎಂದು ಹತ್ತಿರೆಕ್ಕೆ ಹೋಗಿ ನೋಡಿದಾಗಲೇ ತಿಳಿದಿದ್ದು! ಒಂದು ಗಿಡ ಆ ಹಕ್ಕಿಯನ್ನು ಹಿಡಿದು ಕೊಂಡಿದೆ ಎಂದು.!

ಈ ಹಕ್ಕಿಯೂ ನನಗೆ ಹೊಸದು. ಇದನ್ನ ಹಿಡಿದುಕೊಂಡಿದ್ದ ಗಿಡವು ನನಗೆ ಹೊಸದು. ಒಟ್ಟಿನಲ್ಲಿ ಎರಡೂ ಕುತೂಹಲ ಕಾರಿ! ಸಿದ್ದಣ್ಣ ಹೇಳಿದ ಉಗುರು ಭೂತಾಳಿ ಗಿಡ ಹಿಡಿದಿದೆಯೇ ಎಂದರೆ . ಅದು ಬೇರಿನಿಂದ ಪಕ್ಷಿಯನ್ನು ಹಿಡಿದಿರಲಿಲ್ಲ. ಕೊಂಬೆ ಕೊಂಬೆಗೂ ಜೋತು ಬಿದ್ದಿದ್ದ ಸಣ್ಣ ಸಣ್ಣ ಕಾಯಿಗಳ ಗೋಂಚಲುಗಳಲ್ಲಿ ಇದ್ದ ಅಂಟು ಅಂಟುದ ದ್ರವವು ಹಕ್ಕಿಯಾ ರೆಕ್ಕೆಗೆ ಸಿಕ್ಕಿಹಾಕಿಕೊಂಡು ರೆಕ್ಕೆ ಬಡಿದಷ್ಟೂ ಹೆಚ್ಚು ಹೆಚ್ಚು ಸಿಕ್ಕಲು-ಸಿಕ್ಕಲಾಗಿ ಅಂಟಿ ಕೊಂಡು ಹಕ್ಕಿಯು ಹಾರಲು ಆಗದೆ ಬಿಡಿಸಿಕೊಳ್ಳಲು ಆಗದೆ ಒದ್ದಾಡುತ್ತಿದ್ದ ಹಕ್ಕಿಯನ್ನು ಆ ಗಿಡದಿಂದ ಬಿಡಿಸಿ ಪಿಳ್ಳೆ ಕೈಗೆ ಹಿಡ್ಕೋಳ್ಳೋ ಎಂದು ಕೊಟ್ಟು ಒಂದೆರಡು ಫೋಟೋ ತೆಗೆಯುತ್ತಿದ್ದಾಗ ಅವನ ಕೈಯಿಂದ ತಪ್ಪಿಸಿಕೊಂಡು ಹಾರಿ ಸ್ವತಂತ್ರವಾಯಿತು. ಪಿಕಳಾರ ಗಾತ್ರದ ಬೂದು ಬಣ್ಣದ ಆ ಹಕ್ಕಿಯ ತಲೆ ಮತ್ತು ಕತ್ತು ಕಪ್ಪಗಿತ್ತು, ರೆಕ್ಕೆಯ ಮೇಲೆ ಕಪ್ಪು ಪಟ್ಟಿಗಳಿಂದ್ದವು ಎದೆ ಬಿಳಿಬಣ್ಣವಿತ್ತು. ಇದರ ಚೂಪಾದ ಕೊಕ್ಕು ಮತ್ತು ಕಾಲು ಕಪ್ಪಗೆ ಇದ್ದವು ಎಂದು ಗೆಳೆಯ ಅಶ್ವಥ್ ಹೇಳಿದಾಗ ಆ ಕರಿತಲೆಯ ಹಕ್ಕಿಯು ***ಬ್ಲ್ಯಾ ಕ್ ಹೆಡೆಡ್ ಕುಕ್ಕೂ ಶ್ರೈಕ್*** ಎಂದು, ಗಂಡು ಹಕ್ಕಿಗೆ ತಲೆಯೆಲ್ಲ ಪೂರ್ತಿ ಕಪ್ಪಾಗಿರುತ್ತದೆ. ಹೆಣ್ಣು ಹಕ್ಕಿಯ ತಲೆ ಮತ್ತು ದೇಹ ಬೂದು ಬಣ್ಣವಿದ್ದು, ತಳಭಾಗ ಮಾಸಲು ಬಿಳಿಯಾಗಿರುತ್ತದೆ ಎಂದು ತಿಳಿಸಿಕೊಟ್ಟರು. ಆ ಪಕ್ಷಿಯನ್ನು ಹಿಡಿದುಕೊಂಡಿದ್ದ ಗಿಡದ ಫೋಟೋಗಳನ್ನು ಶಿಂಡೇರವರಿಗೆ ಕಳಿಸಿಕೊಟ್ಟೆ ಅವರೂ ಅದು ***ಕೊಮ್ಮೆಗಿಡ (Boerhaavia diffasa)*** ವೆಂದು , ಬಹುಉಪಯೋಗಿ ಔಷಧೀಯ ಸಸ್ಯವೆಂದು ಹಾಗೂ ಪಕ್ಷಿಗಳು ಅದರ ಬೀಜಗಳನ್ನು ತಿನ್ನಲು ಬಹಳ ಇಷ್ಟಪಡುತ್ತವೆ ಎಂದು ತಿಳಿಸಿದರು.

ಕಣ್ಣ ಮುಂದೆಯೇ ನಡೆಯುವ ಇಂತಹ ಪ್ರಕೃತಿಯ ವಿಚಿತ್ರಗಳನ್ನು ಕಂಡು ನನಗೆ ಸೋಜಿಗವಾದದ್ದಂತೂ ಖಂಡಿತ.

# ವಿದ್ಯಾರ್ಥಿಗಾಗಿ ವಿಜ್ಞಾನ

### ಈ ತಿಂಗಳು ವಿಜ್ಞಾನ ಪ್ರಪಂಚದಲ್ಲಿ ಹೊಸತು

## ಜೀವ ಸೃಷ್ಟಿಯ ಬಗ್ಗೆ



ನಿಮಗೆಲ್ಲ ಒಂದು ಬಹಳ ಸುಲಭದ ಪ್ರಶ್ನೆ ? ಭೂಮಿಯ ಮೇಲೆ ಜೀವಿಗಳೆಲ್ಲ ಹೇಗೆ ಸೃಷ್ಟಿಯಾದವು? ಉತ್ತರ ಹೊಳೆಯಲ್ಲಿಲ್ಲವೇ ! ಯೋಚಿಸಬೇಡಿ ಮಹಾನ್ ವಿಜ್ಞಾನಿಗಳಿಗೂ ಉತ್ತರ ಗೊತ್ತಿಲ್ಲ .

ಜೀವವಿಕಾಸದ ಪ್ರಕಾರ ಮೊದಲು ಬ್ಯಾಕ್ಟೀರಿಯಾದಂತಹ ಏಕ ಕೋಶ ಜೀವಿಗಳು ಸೃಷ್ಟಿಯಾಗಿ ನಂತರ ಬಹುಕೋಶ ಜೀವಿಗಳು ಉಗಮವಾಗಿ ಜೀವ ವಿಕಾಸಗೊಂಡು ಈಗ ಅಸ್ತಿತ್ವದಲ್ಲಿರುವ ಜೀವಿಗಳು ಸೃಷ್ಟಿಯಾಗಿವೆ. ಆದರೆ ಮೊದಲ ಜೀವಕೋಶ ಹೇಗೆ ಸೃಷ್ಟಿಯಾಯಿತು ಎಂಬುದು "ಕೋಳಿ ಮೊದಲೋ? ಮೊಟ್ಟೆ ಮೊದಲೋ?!" ಎಂಬ ಹಳೇ ತರ್ಕವನ್ನು ಹೋಲುತ್ತದೆ. ಇತ್ತೀಚಿನ ವರದಿಯ ಪ್ರಕಾರ ಜೀವದ ಮೊದಲ ಉಗಮವು ಭೂಮಿಯ ಮೇಲಿನ ನೀರಿನ ಹೊಂಡಗಳಲ್ಲಿ ಸೃಷ್ಟಿಯಾಯಿತು ಎನ್ನಲಾಗಿದೆ. ಸುಮಾರು ನಾಲ್ಕು ಸಾವಿರ ಮಿಲಿಯನ್ ವರ್ಷಗಳ ಹಿಂದೆ ಈ ರೀತಿಯ ಹೊಂಡಗಳಲ್ಲಿ ಜೀವದ ಸೃಷ್ಟಿಗೆ ಬೇಕಾದ ಎಲ್ಲಾ ಕಚ್ಚಾವಸ್ತುಗಳು ಇದ್ದವೆಂದು ವಿಜ್ಞಾನಿಗಳು ಅಂದಾಜು ಮಾಡಿದ್ದಾರೆ. ಇನ್ನೊಂದು ವಿಜ್ಞಾನಿಗಳ ಗುಂಪಿನ ಪ್ರಕಾರ ಜೀವದ ಉಗಮವು ಸಮುದ್ರದಾಳದಲ್ಲಿರುವ ದಟ್ಟವಾದ ಕಾರ್ಬನಿಲವನ್ನು ಉಗುಳುವ ಹುತ್ತಗಳಲ್ಲಿ ಆಯಿತು ಎನ್ನುತ್ತಾರೆ . ಆಗಿನ ಕಾಲದಲ್ಲಿ ಭೂಮಿಯ ಮೇಲೆಲ್ಲಾ ಹೆಚ್ಚು ನೀರು ಇದ್ದದ್ದ ರಿಂದ ನೆಲದ ಮೇಲಿನ ನೀರಿನ ಹೊಂಡಗಳಲ್ಲಿ ಜೀವದ ಉಗಮದ ಸಾಧ್ಯತೆ ಕಡಿಮೆ ಎಂದು ಒಬ್ಬರು ಪ್ರತಿವಾದಿಸಿದರೆ ಇನ್ನೊಂದು ಗುಂಪು ಸಮುದ್ರದಾಳದಲ್ಲಿ ಖನಿಜಗಳ ಸಾಂಧ್ರತೆ ಕಡಿಮೆಯಿರುತ್ತದೆ ಆದ್ದರಿಂದ ಅವಕಾಶ ಕಡಿಮೆ ಎನ್ನುತ್ತಾರೆ.

# ಗರ್ ಗಸ



***ಫಿರಾನ್ಹಾ!!*** ಈ ಹೆಸರು ಕೇಳದೇ ಇರುವವರು ಇದರ ಬಗ್ಗೆ ತಿಳಿದುಕೊಳ್ಳ ಬೇಕಾದದ್ದು ಏನೆಂದರೆ ಅದು ಅಮೇಜಾನ್ ನದಿಯಲ್ಲಿ ವಾಸಿಸುವ ಒಂದು ಮೀನು. ಸಂಘಜೀವಿಯಾದ ಈ ಮೀನು ಗುಂಪಾಗಿ ವಾಸಿಸುತ್ತವೆ. ನದಿಯ ನೀರಿಗೆ ಬೇರೆ ಯಾವುದಾದರು ಪ್ರಾಣಿ (ಚಿರತೆ, ಡಾಲ್ಫಿನ್, ಮನುಷ್ಯ ಇತ್ಯಾದಿ) ಏನಾದರು ಬಿದ್ದರೆ ಕ್ಷಣಾರ್ಧದಲ್ಲಿ ಸಿಗಿದು ತಿಂದು ಹಾಕಿ ಬಿಡುತ್ತವೆ. ನದಿಯ ನೀರಿಗೆ ಕೈ ಅದ್ದಿ ತೆಗೆಯುವಷ್ಟರಲ್ಲಿ ಕೈಬೆರಳುಗಳನ್ನೇ ತಿಂದು ಮಾಯಮಾಡಿ ಬಿಟ್ಟಿರುತ್ತವೆ!.

ಇವುಗಳ ಹಲ್ಲುಗಳೋ ರೇಜರ್ ನಷ್ಟು ಚೂಪಾಗಿದ್ದೂ ಯಾವುದೇ ಜೀವಿಯನ್ನಾದರೂ ಜೀವಂತ ಸಿಗಿಯಬಲ್ಲವು. ಪ್ರಕೃತಿಯ ವೈಶಿಷ್ಟ್ಯ ನೋಡಿ, ಈ ಭಯಾನಕ ಮೀನೂ ಕೂಡ ಏನು ಮಾಡಲಾಗದಂತಹ ಬಲಿಷ್ಠ ರಕ್ಷಾಕವಚವನ್ನು ***' ಆರಪೈಮ'*** ,ಎಂಬ ಮೀನು. ಹೊಂದಿದೆ!.



***ಮಾರ್ಕ್ ಮೇಯರ್ಸ್*** ಎಂಬಾತ ಒಂದು ದಿನ ಮೋಜಿಗಾಗಿ ನದಿಯಲ್ಲಿ ಗಾಳ ಹಾಕಿ ಮೀನು ಹಿಡಿಯುವಾಗ ಒಮ್ಮೆ ಈ ***ಆರಪೈಮ*** ಮೀನು ಸಿಕ್ಕಿತಂತೆ. 2.5 ಮೀಟರ್ ಉದ್ದವಿದ್ದು , 150 ಕೇಜಿ ತೂಗುವ ಈ ಮೀನುಗಳ ಮೈ ಮೇಲೆ ಹತ್ತು ಸೆಂಟೀ ಮೀಟರ್ ಉದ್ದವಿರುವ ಅನೇಕ ಉರುಪೆಗಳು ಇವೆಯಂತೆ!. ಈ ***ಆರಪೈಮ*** ಮೀನಿನ ಉರುಪೆಗಳು ***ಫಿರಾನ್ಹಾ*** ಮೀನಿನ ಹಲ್ಲುಗಳ ಕಡಿತದ ಹಿಡಿತಕ್ಕೆ ಸಿಗದೇ ಇರಲು ಕಾರಣವಾದರೂ ಏನು? ಎಂಬುದನ್ನು ತಿಳಿಯಲು ಅದರ ಉರುಪೆಗಳನ್ನು ಎಲೆಕ್ಟ್ರಾನ್ ಮೈಕ್ರೋಸ್ಕೋಪ್ ನಲ್ಲಿ ನೋಡಿ ಕಂಡುಹಿಡಿದಿದ್ದಾನೆ. ಈ ಉರುಪೆಗಳು(ಸ್ಕೇಲ್ಸ್) ಎರಡು ಪದರಗಳಾಗಿ ರಚನೆಯಾಗಿದ್ದು ಒಳಗಿನ ಪದರ ***ಕೋಲಾಜನ್*** ಎಂಬ ವಸ್ತುವಿನಿಂದ ಮಾಡಲ್ಪಟ್ಟಿದ್ದು ಸ್ವಲ್ಪ ಮೆತುವಾಗಿದೆ,. ಉರುಪೆಯ ಹೊರಪದರವೂ ಸಹ ***ಕೋಲಾಜನ್*** ಎಳೆಗಳಿಂದ ರಚಿತವಾಗಿದ್ದು, ಕ್ಯಾಲ್ಶಿಯಮ್ ನಿಂದ ಲೇಪನವಾಗಿರುವುದರಿಂದ ಕಲ್ಲಿನಂತೆ ಗಟ್ಟಿಯಾಗಿದೆ. ***ಕೋಲಾಜನ್*** ಎಂಬುದು ಮೂಳೆಗಳ ಸಂಧಿಗಳಲ್ಲಿ ಕಂಡು ಬರುವ ವಸ್ತು. ಈ ಗಟ್ಟಿ-ಮೆತು ಪದರಗಳ ರಚನೆಯಿಂದ ಫಿರಾನ್ಹದ ಹಲ್ಲುಗಳು ಮುರಿದು ಬೀಳುತ್ತವೆ. ***ಫಿರಾನ್ಹ***ದ ದೊಡ್ಡ ಗುಂಪಿನ ಮಧ್ಯೆ ಈ ***ಅರಪೈಮಾ ಮೀನು*** ಸಲೀಸಾಗಿ ತಪ್ಪಿಸಿಕೊಳ್ಳುವದನ್ನು ಕಂಡು ಕೊಂಡಿರುವ ಏಕೈಕ ಜೀವಿ. ಇದರ ಇನ್ನೊಂದು ವಿಶೇಷವೇನೆಂದರೆ ಲಂಗ್ ಫಿಶ್ ಇರುವ ಹಾಗೆ ಶ್ವಾಸಕೋಶವನ್ನೂ ಸಹ ಹೊಂದಿದೆ. ***ಅರಪೈಮಾ ಮೀನು*** ಜೀವವಿಕಾಸದಲ್ಲಿ ಮೀನುಗಳಿಂದ ಉಭಯವಾಸಿಗಳ ನಡುವೆ ಇರುವ ' ಮಿಸ್ಸಿಂಗ್ ಲಿಂಕ್' .



# ಜಾಲಾರಿ ಹೂ

## *Shorea roxburghii*

ಫೆಬ್ರವರಿ ತಿಂಗಳು ಆರಂಭವಾದೊಡನೆ ಕಾಡಿನ ಸಕಲ ಸಸ್ಯಗಳೂ ಎಲೆ ಉದುರಿಸಿ ಅಸ್ತಿಪಂಜರದಂತೆ ಬೋಳು ಬೋಳಾಗಿ ಕಾಣುತ್ತವೆ. ಅಲ್ಲೊ ಇಲ್ಲೊ ಉಳಿದುಕೊಂಡಿರುವ ನೀರಿನ ಹಳ್ಳಕ್ಕೆ ಸಕಲ ಜೀವಸಂಕುಲವು ನೀರನ್ನು ಅರಸಿ ಬಂದು ನೀರು ಕುಡಿಯುವುದನ್ನು ನೋಡುವುದಕ್ಕೆ ಕಣ್ಣಿಗೆ ಆನಂದವಾದರೆ, ಮತ್ತೊಂದು ಕಡೆ ಇಡೀ ಕಾಡೆ ಘಮಘಮಗುಟ್ಟುವಂತೆ ಮಾಡುವ ಜಾಲರಿ ಮರದ ಹೂ ರಾಶಿ.

ಶಿವರಾತ್ರಿ ಹಬ್ಬಕ್ಕೆ ಸರಿಯಾಗಿ ಕಾಡೆಲ್ಲ ಗಮ್ಮೆನ್ನುವುದು ಈ ಜಾಲಾರಿ ಹೂವಿಂದಲೇ.. ಸುಮಾರು ಹತ್ತು ಮೀಟರ್ ಉದ್ದ ಬೆಳೆಯುವ ಈ ಮರ ವರ್ಷದ ಎಲ್ಲಾ ಕಾಲದಲ್ಲೂ ಎಲೆ ಉದುರಿಸುತ್ತಾದರು, ಫೆಬ್ರವರಿಯಲ್ಲಿ ಎಲ್ಲಾ ಎಲೆಗಳು ಉದುರಿ ಚಿಗುರೊಡೆದು ಕೊಂಬೆ ಕೊಂಬೆಗೂ ಹೂ ಬಿಟ್ಟಿತೆಂದರೆ ಒಂದು ವಾರದ ಕಾಲ ಇಡೀ ಕಾಡೇ ಘಮ ಘಮ ಸುವಾಸನೆಯಿಂದ ತೇಲುತದೆ.

ಈ ವಾಸನೆಯನ್ನರಸಿ ಬರುವ ಜೇನು ಹುಳು, ಚಿಟ್ಟೆ ಗಳಿಗೆ ಮಕರಂದದ ರಸದೌತಣವಾದರೆ ಕೆಲವು ದುಂಬಿಗಳಿಗೆ ಜಾಲಾರಿಯ ಕಾಯಿ ತನ್ನ ಮಕ್ಕಳನ್ನು ಬೆಳೆಸಲು ಆಶ್ರಯ ತಾಣ.

“ಸಾಮಾನ್ಯವಾಗಿ ಬೆಟ್ಟಗಳ ತಪ್ಪಲುಗಳಲ್ಲಿ ಹೆಚ್ಚಿಗೆ ಬೆಳೆಯುವ ಈ ಮರ ದಕ್ಷಿಣ ಭಾರತದ ನಿತ್ಯ ಹರಿದ್ವರ್ಣ ಅರಣ್ಯ ಸಾಲಿನ ಉದ್ದಕ್ಕೂ ಕಂಡುಬರುತ್ತದೆ”. ಇದರ ಕಾಂಡದಲ್ಲಿ ಹೊರ ಸೂಸುವ ಜೀವರಸವು ಗಟ್ಟಿಯಾಗಿ ಹರಳಾದಾಗ ಇದನ್ನು ಕಾಡುಪೂಜಾರರು ಧೂಪವಾಗಿ ಬಳಸುತ್ತಾರೆ. ಇವರ ದೃಷ್ಟಿಯಲ್ಲಿ ಈ ಮರ ಬಹು ಪೂಜನೀಯ. ಈ ಮರ ಹೂ ಬಿಟ್ಟಾಗ ದೇವಕನ್ಯೆಯರು ಬಂದು ರಾತ್ರಿ ಹೊತ್ತು ಆಟ ಆಡಿಕೊಂಡು ಹೋಗ್ತಾರೆ ಕಣೆ! ಎಂದು ದೇವಜ್ಜಿ ಹೇಳುತ್ತಾಳೆ.

ಬೆಂಗಳೂರಿನ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನಕ್ಕೆ ಸೇರಿದ ಕಲ್ಕೆರೆ, ರಾಗಿಹಳ್ಳಿ ರಿಸರ್ವ್ ಫಾರೆಸ್ಟ್ ಹಾಗು ಜೇನ್ಕಲ್ಲು ಗುಡ್ಡದ ತಪ್ಪಲಲ್ಲಿ ಈಗ ಜಾಲಾರಿ ಮರವು ಹೂ ತಳೆದಿರುವುದರಿಂದ ಕಾಡೆಲ್ಲ ಘಮ ಘಮಿಸುತ್ತಿದೆ.

**- ಮಮತ.ಆರ್**



# ಕಾಡಿನ ಕುವರರು

ಕಾಡಿನ ಕುವರರು  ನಾವೆಲ್ಲಾ
ಕಾಡು ಅಲೆಯಲು ಭಯವಿಲ್ಲಾ.
ಕಾಡಿನ ಮಕ್ಕಳು ನಾವೆಲ್ಲಾ
ಕಾಡಿಗೆ   ಕಾವಲು  ನಾವೆಲ್ಲಾ

ಬೆಳೆಸದೆ ಕಡಿದರೆ ಕಾಡೆಲ್ಲಾ
ಭೂಮಿಯು ಬರಡಾಗುವುದೆಲ್ಲಾ
ಸೂರ್ಯನ  ತಾಪದಿ  ನಾವೆಲ್ಲ
ನೀರಿಲ್ಲದೆ ಸಾಯುವೆವು ನಾವೆಲ್ಲಾ

ಬನ್ನಿರಿ ಸುತ್ತಿರಿ ಕಾಡೆಲ್ಲಾ
ಬನ್ನಿರಿ ನೋಡಿರಿ ನೀವೆಲ್ಲಾ
ಬನ್ನಿರಿ  ತಿಳಿಯಿರಿ ಈ ವನವ
ಬನ್ನಿರಿ  ಸವಿಯಿರಿ ಈ ಬನವ
ಬನ್ನಿರಿ ಉಳಿಸುವ ನಮ್ಮ ವನವ



- ನಾಗರಾಜ್ ಆರ್ ಅಂಬಿಗ
ಸಿದ್ದಾಪುರ  (ಉ.ಕ)